ಎಸ್.ಶಿವಣ್ಣ

# ಚಿತ್ರದುರ್ಗ‘ಬೃಹನ್ಮಠ’ ಸಂಗ್ರಹದಲ್ಲಿನ ಕೆಲವು ಕೃತಿಗಳು

ಚಿತ್ರದುರ್ಗದಲ್ಲಿನ ಶೂನ್ಯ ಸಿಂಹಾಸನ ಪರಂಪರೆಯ ಬೃಹನ್ಮಠ ವೀರಶೈವ ಸಮಾಜದ ವಿರಕ್ತಮಠಗಳ ಮುಡಿಯಮಾಣಿಕ. ಇಲ್ಲಿನ ಗುರು ಪರಂಪರೆ ಕ್ರಿ.ಶ. ಹದಿನೇಳನೆಯ ಶತಮಾನದ ಉತ್ತರಾರ್ಧದಿಂದ ಇಂದಿನವರೆಗೂ ಮುಂದುವರಿದಿದೆ. ಬಿಚ್ಚುಗತ್ತಿ ಬರಮಪ್ಪ ನಾಯಕ ಮುರಿಗಾ ಶಾಂತವೀರಸ್ವಾಮಿಗಳು (?-1703) ಚಿತ್ರದುರ್ಗದಲ್ಲಿ ಸ್ಥಿರವಾಗಿ ನೆಲಸಲು ಕಾರಣೀಭೂತನಾದನು.

ಮಠದಲ್ಲಿ ಕಾಲದಿಂದ ಕಾಲಕ್ಕೆ ಸಂಗ್ರಹಗೊಂಡ ಸುಮಾರು ಏಳುನೂರಕ್ಕೂ ಮೀರಿ ಓಲೆ ಕೃತಿಗಳ ಸಂಗ್ರಹವಿದ್ದು ಇದರೊಳಗಿನ ಕೃತಿಗಳ ಸಂಖ್ಯೆ ನಾಲ್ಕು ಸಾವಿರದ ಆರುನೂರರಷ್ಟಿದೆ. ಇವುಗಳಲ್ಲಿ ಹಲವು ಕೃತಿಗಳು ಕವಿಚರಿತೆಕಾರರಾದ ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರಿಗೂ ಸಿಗದಂತಹವುಗಳಾಗಿದ್ದು ಅವುಗಳಲ್ಲಿ ಕೆಲವನ್ನು ಈ ಮುಂದೆ ಪರಿಚಯಿಸಲಾಗಿದೆ.

**ಹರೀಶ್ವರ ದೇವರಕಂದ** : ಹಂಪೆಯ ಹರಿಹರ (1200) ಕೃತ. 102 ಕಂದಗಳಿವೆ. ಹಂಪೆಯ ವಿರೂಪಾಕ್ಷ ಸ್ತುತಿ ಕೃತಿಯವಸ್ತು. ಈತನ ‘ಮಹಿಮಾಷ್ಟಕ’, ‘ಪ್ರೇಮಾಷ್ಟಕ’ಗಳಲ್ಲಿನ ಕಂದಗಳೂ ಇಲ್ಲಿ ದೊರೆಯುತ್ತವೆ.

ಆದಿಯ ಕಂದ:
ಶ್ರೀಮತ್ಸರ್ವಂ ಪರಮ
ಸ್ವಾಮಿ ದಯಾಪಾರ್ಥಿ ಭಕ್ತಿಯ ಕೊಡು ನಮಗು
ದ್ದಾಮ ಸುರರಾಜರಾಜಂ
ಸೋಮಧರಂ ಕೂರ್ತು ಹಂಪೆಯ
ವಿರೂಪಾಕ್ಷಾ ||೧||

ಅಂತ್ಯದ ಕಂದ :
ಸತ್ಕೃತ ಸದ್ಭಕ್ತರಸ
ತ್ಕೃತ್ಯರ ಸರ್ವಾಂಗಲಿಂಗಸಾಹಿತ್ಯರ ಸಂ
ಸ್ತುತ್ಯರ ಸಂತುಷ್ಟಾತ್ಮರ
ಭೃತ್ಯತ್ವಮನೀಯ ಹಂಪೆಯವಿರೂಪಾಕ್ಷಾ ||೧೦೨||

**ನೂತನ ಪುರಾತನರ ರಗಳೆ** : ವಿರಕ್ತತೋಂಟದಾರ್ಯ (1616) ಆದಿಯಲ್ಲಿ ಕಂದವಿದ್ದು ಉಳಿದ ಭಾಗ ರಗಳೆಯಲ್ಲಿದೆ.

ಕಾತ್ಯಾಯಧಿಪತಿ ನೇಮದಿ
ಭೂತಳದೊಳಗುದಿಸಿಸಕಳ ಮಹಿಮೆಯ ಪಡೆದ
ತ್ಯಾತಿಶಯನಾಂತ ನೂ(ತ್ನ)[1]ಪು
ರಾತರ ನಾಂ ಪೊಗಳ್ವೆ ಗುರು ನಿರಂಜನಲಿಂಗಾ

ಶ್ರೀಗುರು ನಿರಂಜನಗಣೇಶ ಕೇಳೊಲವಿನಿಂ
ರಾಗದಿಂ ನೂತ್ನ ಪ್ರಮಥರ ಬಂಟ ನಾನಯ್ಯ||೧||

ಭೋಗಿಶಯನ ಪ್ರಥುಮೆಯಂ ನೆಲಿಕೆ ಕೆಡಪಿದ ಶಿವ
ನಾಗಮಜ್ಜನು ಪಾಲ್ಕುರಿಕೆಸೋಮನಾಳಯ್ಯ||೨||

ಚಕ್ರಪಾಣಿಯರಂಗುಪದೇಶವಿತ್ತ ಗುರು
ಚಕ್ರವರ್ತಿಯು ಚತುರ್ಮುಖಿ ಬಸವನಾಳಯ್ಯ||೩||

ಶುಭದಿ ಭಸಿತವ ತಳಿದು ಕೆಱೆಯ ನೆಱೆ ನಿರ್ಮಿಸಿದ
ಅಭವಸಮರೂಪ ಪದುಮರಸರಾಳಾನಯ್ಯ||೪||

ಚಂದದಿಂ ಬಸವಪೌರಾವಣನುಸುರ್ದು ಶಿವ
ನಿಂದ ಮುಕ್ತಿಯಂ ಪಡೆದ ಭೀಮಕವಿಯಾಳಾನಯ್ಯ||೭||

ತೆರೆಯ ಸೀರೆಯು ಬೇಯೆ ಹಂಪೆಯೊಳ್ ದ್ವಾರಾಬ್ಧಿಯಿಂ
ಕರದಿ ನಂದಿಸಿದ ಹರೀಶ್ವರದೇವರಾಳಾನಯ್ಯ||೯||

ಉರುತರದದ ಷಡುಸ್ಥಲದ ಜ್ಞಾನಿಯೆಂದೆನಿಸುತಿಹ
ವರ ವೀರಶೈವ ಜಕ್ಕಣ್ಣರಾಳಾನಯ್ಯ||೧೧||

ಪರಭಕ್ತರಿಗೆ ಭವಗಳಿಲ್ಲೆಂದು ಸ್ತಂಭವಂ
ನೆಱೆ ನೆಡಿಸಿದಾ ಮಾಯಿದೇವರಾಳಾನಯ್ಯ||೧೨||

ಶೈವರತ್ನಾಕರವ ಪೇಳ್ದ ಶಿವನೊಲವೊಡೆದ
ಕೋವಿದನು ಜೋತಿನಾಥರ ಬಂಟನಾನಯ್ಯ॥೧೫॥

ಉರುವೇದ ನಾಲ್ಕನಂತ್ಯಜನಿಂದಲೋದಿಸಿದ
ಹಿರಿಯ ಗುಬ್ಬಿಯ ಮಲ್ಲಣಾರ್ಯರಾಳಾನಯ್ಯ॥೧೬॥

ನಿರುತದಿಂ ಬಸವಪೌರಾಣ ಕೋವಿದನೆನಿಪ
ಗರುವ ಗುಬ್ಬಿಯ ಚಿಕ್ಕಮಲ್ಲಣ್ಣನಾಳಾನಯ್ಯ॥೧೮॥

ಗುರು ನಿರಂಜನಲಿಂಗದಮಲಚಾರಿತ್ರಮಂ
ವಿರಚಿಸಿದ ಶಾಂತಮಲ್ಲಯ್ಯನಾಳಾನಯ್ಯ॥೧೯॥

ಹರಗೃಹದೊಳಗಿರ್ದು ಹೂಗಲ್ಲ ಹಾಜಿಸಿ ರಜಿತ
ಗಿರಿಗೆ ನೆಜಿ ಹೋದ ವೀರಣ್ಣನಾಳಾನಯ್ಯ॥೩೫॥
ಚರಣಜಲದಳಿದು ಕುದುರೆಯ ಸೂಲೆಯುಂ ಕಳೆದ
ವರಧಾನ್ಯದಮ್ಮನ ಮನೆಯ ತೊಂಡನಾನಯ್ಯ॥೩೯॥

ಪುರದಹನವಾಗುತಿರೆ ಚರಣಜಲಭಾಂಡದಲೆ
ಪರಿಹರಿಸಿಮೆಟಿದ ಅಮ್ಮಾಯಿಯಾಳಾನಯ್ಯ॥೪೦॥

**ಶಿವಸಹಸ್ರನಾಮ:** ವಿರಕ್ತತೋಂಟದಾರ್ಯ (1616) ಕೃತ ವಾರ್ಧಕಷಟ್ಪದಿ ಮತ್ತು ಪರಿವರ್ಧಿನಿ ಷಟ್ಪದಿ ಗಳಲ್ಲಿನ 48 ಪದ್ಯಗಳಿವೆ.

ಆದಿಯ ಪದ್ಯ –

ವಾರ್ಧಿಕ ಷಟ್ಪದನು॥
ಶ್ರೀಮದುಪಲಬ್ಧಿ ಪ್ರಕಾಶನನುಪಮಸುಖ
ಸೋಮನಪರಿಚ್ಛೇದ್ಯ ಪಥಿಕ ಮಹಿಮಾನ್ವಿತನ
ನಾಮಯನಖಂಡಸ್ವರೂಪನುನ್ನತ ಯೋಗಿಜನ
[ಹೃತ್ಕಮಲಕರ್ಣಿಕಾ
ಧಾಮನವ್ಯಕ್ತನವ್ಯಯನವಿಕೃತಂ ಮುಕ್ತಿ
ಭಾಮಾಮನೋವಲ್ಲಭಂ ನಿಗಮ ದುರ್ಲಭಂ
ಪ್ರೇಮದಿಂದಂ ನಿರಂಜನಲಿಂಗನಿರದೆಮಗಾನಂದ
[ಸಂದೋಹಮಂ ॥೧॥

ಬಸವ ಸ್ತೋತ್ರದಕಂದ : ಸಂಪಾದನೆ ಸಿದ್ಧವೀರೇಶ್ವರದೇವ(1600) ಅಪೂರ್ಣ 10 ಕಂದಗಳಿವೆ.

ಶ್ರೀ ಗುರುವೆ ಶರಣು ಬಸವಾ
ಆಗಮನಿಗಮಾತೀತ ಶರಣುಲಿಂಗವೆ ಬಸವ
ಭೋಗಿಚರ ಶರಣು ಬಸವಾ
ಯೋಗಿವರ ನಿಮ್ಮನಾಂ ಸ್ತುತಿಯಿಸುವೆ ಬಸವಾ ॥೧॥

ಗುರುವೆ ಶ್ರೀಗುರುವೆ ಬಸವಾ
ಪರವೇ ಆದಿಮಧ್ಯಾಂತರಹಿತ ಬಸವಾ
ಮರುತಾನಲಜಲನಭರವಿ
ಧರೆ ಸೋಮಾತ್ಮ ಕಾಯ ನಿರ್ಮಾಯನೆ ಬಸವಾ ॥೨॥

ಪಂಚತ್ವ ದೂರನೆ ಬಸವ
ಸಂಚಿತ ಕರ್ಮಾದಿ ಗುಣಗಣ ರಹಿತನೆ ಬಸವ
ಪಂಚೇಶುನಾಶನೆ ಬಸವ
ಪಂಚಾಚುನಷ್ಟವಿಂಶತಿ ಸಂಚನೆ ಬಸವಾ ॥೩॥

**ಜೆಡೆಯ ಚಿಕ್ಕಬಸವ ಸ್ತೋತ್ರ :** ಅಜ್ಞಾತ (1730). 53 ಷಟ್ಪದಿ ಹಾಗೂ ಕಡೆಯಲ್ಲಿ 3 ಕಂದ ಗಳಿವೆ. ಶ್ರೀಮದಭ್ರಗಜೂಟ ಶಿಷ್ಟೇಷ್ಟಧಾತ ಪ್ರ
ಧಾಮ ಭಾಸ್ಮಣಿವಹ್ನಿನಯನತ್ರಯೂರ್ವಿಜಲ
ಧೂಮಾಂಕಸ್ವನನಾಗಸಂ ಚಂದ್ರಸೂರ್ಯಾತ್ಮ ಪ್ರೇಮ
ದೂಪಲೆಂದೆನಿಸಿದಂ
ಸ್ವಾಮಿ ಸರ್ವಾಂತರ್ಗತ ತಜ್ಜ್ಯೋತಿ ಚಿದ್ಬೀಜ
ಗ್ರಾಮ ಪ್ರಪಂಚರಹಿತಂ ದಯಾನಿಧಿ ನಿತ್ಯ
ಕೋಮಲಾಭಯ ವರದಪಾಣಿ ರಕ್ಷಿಸು
ಪದವ ನಂಬಿದೆಂ ಜೆಡೆಯವೃಷಭಾ ॥೧॥

ವಾಗ್ರಮಣವರ ಪಂಕಜಾಲಯಪ್ರೀತ ನುತ
ಶೀಗ್ರಗಾಶನಕರ್ಣವೇಷ್ಟ ನಿಚ್ಯಕ ದಿವಿಜ
ದುಗ್ರಮಣಿಮೌಳಿರಾಜಿತಪಾದಪಂಕಜಂಪರಮಗುಣ
ನಿಳಯವಿರಳಂ
ಸುಗ್ರೀವಗಳಾಸುರಜೇಷ್ಟ ಮೂರ್ಧನನಾಂಕ
ಅಗ್ರಗಣ್ಯಯುತಾಮಳಪಾಣಿ ಪರಮಪ್ರ
ದಿಗ್ರಮ್ಯಚಲ ರಕ್ಷಿಪುದು ನಂಬಿದೆ ನಿನ್ನ
ಜೆಡೆಯದೇಸಿಕೇಂದ್ರ ॥೨॥

ಶರಣು ಸರ್ವಜ್ಞ ಪರ ಶರಣು ಶಾಶ್ವತಮೂರ್ತಿ
ಶರಣು ಶಮನ ವಿಭಂಗ ಶಾಂತ ಹೃದಯುರುಲಿಂಗ
ಶರಣು ದುರ್ಭಯ ಭಂಗ ಕರುಣಾಂತರಂಗ
ಪುರಹರಣ ಹರಿಕೋಟಿವರಣ
ಶರಣು ಕರ[ಣ] ಪ್ರಬಲವರಣವರ್ಯವರೇಣ್ಯ
ಶರಣು ಪೂಸರ ತ್ರಿಗುಣದೋಷ ಸಂತ್ತತಿ ನಾಶ

ಶರಣು ಶ್ರೀಗುರು ಚಿಕ್ಕವೃಷಭೇಶ ಕೀರ್ತಿ( ಯಶ)[2]
ಶರಣು ತದಪದಯುಗಳಕೆ ॥೩॥

ಗುರು ಜೆಡೆಯ ಚಿಕ್ಕಬಸವೇ
ಶ್ವರ ಪದಪದ್ಮಂಗಳೆನ್ನ ಹೃದಯದೊಳನಿಶಂ
ಭರದಿಂದ ಶೋಭಿಸುತ್ತಿರೆ
ಧರೆಯೊಳ್ಸದ ನಿತ್ಯ ಮುಕ್ತನಲ್ಲವೆ ತಿಳಿಯಲ್ ॥೧॥

ಗುರುಕರುಣ ಕಾರಣವಾಗಿ
ಗುರುವಿಂದಧಿಕದೈವವಿಲ್ಲ ನೋಡಲ್ (?)
ಗುರುವನೇ ಭಜಿಸಿ ಯಜಿಸುತೆ
ಬರಿಭವವಂ ಕಳೆಯುಬೇಕು ಬಲ್ಲವರ್ಮುದದಿಂ ॥೨॥

ಶ್ರೀ ಗುರುವೆ ಲಿಂಗ ತನಗಂ
ಶ್ರೀ ಗುರುವೆ ಜಂಗಮು ವ ಮಲ ಗುರು ಮೂರೊಂದೇ
ಶ್ರೀ ಗುರುವೆ ಏಕಮದು ಶಿವ
ಶ್ರೀ ಗುರುವಿನ ಪದವ ಭಜಿಪನವ ಕೃತಕೃತ್ಯಂ ॥೩॥

**ಗುರುಸ್ತೋತ್ರಪದದ ಕಂದನಾಂದ್ಯ : ಅಜ್ಞಾತ** (1730). ಆದಿಯಲ್ಲಿ ವೃತ್ತವೊಂದಿದ್ದು. ಅನಂತರ ಇಪ್ಪತ್ತೈದು ಕಂದಗಳಿವೆ.

॥ ವೃತ್ತ ॥ ಶ್ರೀಮದ್ಭಕ್ತಸುಬಂಕರಂ ಶಶಿಧರಜೂಟಂ ದಯಾಸಾಗರಂ
ವಾಮಾಂಬೋಧರ ಚಂಡಮಾರುತನಿಭಂ ಪಂಚಾನನಂ ಪಾರ್ವತೀ
ನಾಮಾಂಗಂ ವರಹಾವತಾರಿ ಹರಿಣೀ ಸನ್ಮುಕ್ತಿದ ಶ್ರೀಕರಂ
ಪ್ರೇಮುಬೆತ್ತೆನಗೀಗೆ ಮುಕ್ತಸುಬವುಶ್ರೀ ಬಂಡೆದಣ್ಣಾಯಕಂ

॥ಕಂದ॥
ಶ್ರೀಮತ್ಪಂಕಜನುತ ಮು
ಖ್ಯಾಮರ ನತಪಾದಕಮಲ ಹರಿನುತ ಹರನತ
ಪ್ರೇಮಿ ನೀಯೆನ್ನ ರಕ್ಷಿಸು
ಸ್ವಾಮಿ ಶ್ರೀ ಜೆಡೆಯ ಚಿಕ್ಕಬಸವ ಮಹೇಶಾ -೧-

ಕರದಲಿ ಬ್ರಹ್ಮಕಪಾಲವು
ಶಿರದಲಿ ಸುರನದಿಯು ಉರದಿ ಶಿರಮಾಲೆಗಳಂ
ಧರಿಸಿ ರಂಜಿಸುವ ದೇವನೆ
ಪೊರೆಯೊ ಶ್ರೀ ಜೆಡೆಯ ಚಿಕ್ಕಬಸವಮಹೇಶಾ -೨-

ಬಿಜ್ಜಳಪತಿ ಸನ್ನುತ ಮಹ
ಪಜ್ಜಳಜನೆ ಕಾಯಕದಳಿಕುಂಜರರೂಪ
ಸಜ್ಜಂಗಮುಪದಪೂಜಕ
ಮಜ್ಜೀವೇಶ್ವರನೆ ಬಸವ ಪಾಲಿಪುದೆನ್ನಂ -೩-

ಅಕ್ಕನಾಗಲೆಯ ಪುತ್ರನೆ
ಮುಕ್ಕಣ್ಣಾಚಾರವರ್ಧಿ ಚಂದ್ರೋದಯನೇ
ಪಕ್ಕಿಗಳ ವಂದ್ಯನೆ ಜೆಡೆಯ
ಚಿಕ್ಕಬಸವ ಮ(ಹಿ)[3]ಶ ರಾಜ ರಕ್ಷಿಪುದೆನ್ನಂ -೪-

ಗುರುಸ್ತೋತ್ರವ(ನು)[4] ರಾಗದಿ
ಬರದೋದಿ ಕೇಳೆ ಭವಬಂಧನಂಗಳು ಹೋಗಿ
ವರ ಭೋಗ ಮೋಕ್ಷ[5] ಆಗುವ
ವರಸಿದ್ಧಾಂತವು ಜೆಡೆಯ ಬಸವೇಶಮಹೇಶ -೫-

---

1. ತನ
2. ಯುಯುಸವ
3. ಹೇ
4. ನವ
5. +ವು